ಕಲ್ಲನಗೌಡ ತಿ. ಪಾಟೀಲ*

# ಪರಸಗಡದ ಪರಿಚಯ

ಪರಸಗಡವು ಬೆಳಗಾಂವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಪೈಕಿ ಹಾಳಾದ ಕೋಟೆ. ಇದು ಸವದತ್ತಿಯಿಂದ ಪೂರ್ವಕ್ಕೆ ಏಳುಕೊಳ್ಳದ ಎಲ್ಲಮ್ಮಾ ದೇವಸ್ಥಾನದ ಪಕ್ಕಕ್ಕೆ ಇರುವ ಗುಡ್ಡದಲ್ಲಿ ಇದೆ. ಈ ಕೋಟೆಯಲ್ಲಿ ಜನ ವಾಸವಿಲ್ಲ. ವೇದಕಾಲದಲ್ಲಿ ಋಷಿಮುನಿಗಳು ವಾಸವಾದ ಪವಿತ್ರಸ್ಥಾನ, ತಪಸ್ಸುಗೈದ ಸುಕ್ಷೇತ್ರವೆಂದು ನಂಬಿಕೆ. ಇಲ್ಲಿ ಜಮದಗ್ನಿಯ ಬಿಡಾರವಿತ್ತು ; ಆ ಸಮಯದಲ್ಲಿ ತಂದೆಯವರ ವಚನ ಪಾಲಿಸಿದ ಭಾರ್ಗವರಾಮನು ಜಮದಗ್ನಿ ರೇಣುಕೆಯರ ಪುತ್ರನಾಗಿ ಜನಿಸಿ ಇದೇ ಪರಸಗಡದಲ್ಲಿ ಘೋರ ತಪಸ್ಸನ್ನಾಚರಿಸಿ ಪರಮಾತ್ಮನಿಂದ ಪರಶು (ಕೊಡಲಿ)ವನ್ನು ವರವನ್ನಾಗಿ ಸ್ವೀಕರಿಸಿದ ಪವಾಡ ಕ್ಷೇತ್ರವೆಂದು ಹೇಳುತ್ತಾರೆ. ಕಾರ್ತಿವೀರ್ಯನು ಜಮದಗ್ನಿ ಮುನಿಯನ್ನು ಕೊಂದನೆಂದು ತಿಳಿದು ಭಾರ್ಗವರಾಮನು ಕಾರ್ತಿವೀರ್ಯ ರಾಜನ ಕುಲವನ್ನೇ ಸಂಹಾರ ಮಾಡಿ ಪರಶುರಾಮನೆನಿಸಿಕೊಂಡ ಗಂಡುಮೆಟ್ಟಿನ ಸ್ಥಳ ಪರಸಗಡ.[1] ಈ ಪವಿತ್ರ ಜಾಗದಲ್ಲಿ[2] ರಟ್ಟರಾಜ ವಂಶಿಕರು ೯ನೇ ಶತಮಾನದಲ್ಲಿ ಚಿಕ್ಕ ಕೋಟೆಯನ್ನು ಕಟ್ಟಿಸಿದರು. ರಾಜದರಬಾರವನ್ನು ನಡೆಸಿದರು.[3] ಮುಂದೆ ಕೊಲ್ಲಾಪುರ ಕೇಶಿರಾಜನು ೧೨೩೦ರಲ್ಲಿ ಇದನ್ನು ತನ್ನ ವಶ ಮಾಡಿಕೊಂಡು ತನ್ನ ಆಳ್ವಿಕೆಯನ್ನು ನಡೆಸಿ, ನಂತರ ವಿಜಯನಗರ ಅರಸರ ವಶವಾಯಿತು. ರಾಜ ಮಹರಾಜರು ಆಳಿದ ಪರಸಗಡ ಮುಂದೆ ಆದಿಲ್‌ಶಾಹಿಗಳ ವಶವಾಗಿರಲು ಮರಾಠ ಛತ್ರಪತಿ ಶಿವಾಜಿ ಗೆದ್ದುಕೊಂಡು ಸ್ವಾಧೀನದಲ್ಲಿ ಇಟ್ಟುಕೊಂಡ. ಅವನ ಕಾಲದಲ್ಲಿ ಕೋಟೆ ಇನ್ನೂ ದೃಢವಾಯಿತು.

ಹೈದರ್ ಅಲಿ ಕೂಡ ಪರಸಗಡ ಗೆದ್ದುಕೊಂಡು, ತನ್ನ ವಶ ಮಾಡಿಕೊಂಡು ಸವಣೂರಿನ ನವಾಬರಿಗೆ ಬಿಟ್ಟುಕೊಟ್ಟನು. ನಂತರ ನವಲಗುಂದದ ದೇಸಾಯಿ ಜಯಗೊಂಡನು ಈ ಪರಸಗಡದ ಮೇಲೆ ದಂಡೆತ್ತಿ ಬಂದು ಈ ಕೋಟೆಯನ್ನು ಸ್ವಾಧೀನಪಡಿಸಿಕೊಂಡ. ಕ್ರಿ. ಶ. ೧೭೩೪ರಲ್ಲಿ ಮತ್ತೊಂದು ಹಂತದಲ್ಲಿ ಕೋಟೆಯನ್ನು, ಗೋಡೆಯನ್ನು ಭದ್ರಪಡಿಸಿದನೆಂದ ತಿಳಿದುಬರುತ್ತದೆ.[4] ಮುಂದೆ ಪೇಶ್ವೆಯರ ಆಳ್ವಿಕೆಗೆ ಒಳಪಟ್ಟು ಪೇಶ್ವೆ ರಘುನಾಥನ ದತ್ತುಪುತ್ರನು ೧೮೦೨ರಲ್ಲಿ ಸ್ವಾಧೀನ ಪಡೆದುಕೊಂಡು ಸಣ್ಣ ಕೇಂದ್ರವನ್ನಾಗಿ ಮಾಡಿದನು. ನಂತರ ಬ್ರಿಟಿಷರ ವಶವಾಗಿ ಈ ಪರಸಗಡವನ್ನು ಒಂದು ತಾಲ್ಲೂಕಾಗಿ ೧೮೮೧ರಲ್ಲಿ ಮಾಡಿದರು.

**ಕೋಟೆಯ ವಿವರ :** ಕೋಟೆಯ ಒಳಕ್ಷೇತ್ರವು ಒಂದೇ ಸಮನಾಗಿ ಇಲ್ಲವಾದರೂ ಅಂಕು ಡೊಂಕಾಗಿ ಅಷ್ಟಕೋನ ಆಕಾರವಾಗಿ ಇದೆ. ಇದರ ವಿಸ್ತೀರ್ಣ

---

* ಬೆಳಧಡಿ ಅಂಚೆ, ಗದಗ ತಾಲ್ಲೂಕು, ಧಾರವಾಡ ಜಿಲ್ಲೆ.

1 ರೇಣುಕಾ ಮಹಾತ್ಮೆಯಲ್ಲಿ ಬರತಕ್ಕ ಸನ್ನಿವೇಶಗಳು.

2 ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩ರಲ್ಲಿ ೬೪೯ನೇ ಪುಟ ನೋಡಿರಿ.

3 ಅದೇ ಪುಟ

4 ಅದೇ ಪುಟ

ಅಜಮಾಸು ೪೦ ಎಕರೆ ಆಗಬಹುದು. ಒಂದು ಅಂಚಿನಲ್ಲಿ ನೂರಾರು ಜನ ಅಡಗಿ ಕುಳಿತುಕೊಳ್ಳಬಹುದಾದ ಭಾರಿ ಆಳದ ಕೊರಕಲು ಇದೆ. ಮೂರು ಹಂತವಾಗಿ ಕೋಟೆಯು ಕಟ್ಟಲ್ಪಟ್ಟಿದೆ. ಪ್ರಥಮ ಹಂತದಲ್ಲಿ ಒರಟು ಕಲ್ಲಿನಿಂದ ಗೋಡೆಯನ್ನು ಕಟ್ಟಿದರೆ ಎರಡನೆಯ ಹಂತವನ್ನು ಚೌಕಾಕಾರವಾಗಿ ಕಟ್ಟಿದೆ. ಮೂರನೆಯ ಹಂತವು ಭದ್ರವಾಗಿ ದ್ವಾರ, ಗುಪ್ತ ದಾರಿಗಳಿಂದ ಸುತ್ತುವರಿದಿದೆ. ದೊಡ್ಡ ದೊಡ್ಡ ಬಂಡೆಕಲ್ಲುಗಳಿಂದ ಕಟ್ಟಿದ್ದಾರೆ. ಪ್ರಥಮ ದ್ವಾರವಂತೂ ಎಡ-ಬಲಕ್ಕೆ ಚಿಕ್ಕ ಚಿಕ್ಕ ಬುರುಜಗಳಿಂದ ಕೂಡಿ ಇಕ್ಕಟ್ಟಾದ ದಾರಿ ಇದೆ. ಇದಕ್ಕೆ ಎದುರುಗೋಡೆ ಇದ್ದು ಅದು ಆಯತಾಕಾರದ ಕಿಂಡಿಗಳಿಂದ ಕೂಡಿದೆ. ಎರಡನೆಯ ಹಂತದ ಗೋಡೆಗಳ ಒಳಭಾಗದಲ್ಲಿ ಗುಪ್ತ ದಾರಿ ಉಂಟು. ಸೈನಿಕರ ಗೂಡುಗಳು ಇವೆ. ಕೋಟೆ ಮೇಲ್ಭಾಗಕ್ಕೆ ಹತ್ತಲು ಪಾವಟಿಗೆಗಳು ಇದ್ದು ೧೦ ರಿಂದ ೧೫ ಅಡಿಗಳಷ್ಟು ಅಗಲದ ನೇರವಾಗಿ ಓಡಾಡಲು ದಾರಿ ಇದೆ. ಕುದುರೆಗಳು ಸಹ ಹತ್ತಲೂ ಅನುಕೂಲವಿದ್ದು ಸೈನಿಕರಿಗೂ ಯಾವುದೇ ಅಪಾಯವಾಗಬಾರದಂತೆ ಅಲ್ಲಿ ಗೂಟಕಲ್ಲುಗಳನ್ನು ನೆಟ್ಟಿದ್ದಾರೆ. ಕೋಟೆಗಳ ಮಧ್ಯಭಾಗದಲ್ಲಿ ಕಮಾನು ಆಕಾರವುಳ್ಳ ಚಿಕ್ಕ ಗೂಡುಗಳು ಇದ್ದು ವೈರಿಗಳಿಗೆ ಕಾಣಿಸದ ಹಾಗೆ ಗುಪ್ತ ಗುಹೆಗಳು ಇರುತ್ತವೆ. ಎರಡನೆಯ ಹಂತದ ಗೋಡೆಯ ಮುಖ್ಯ ದ್ವಾರವಂತೂ ಚೌಕಾಕಾರವಿದ್ದು ಭದ್ರವಾದ ಕಲ್ಲಿನಿಂದ ಅಷ್ಟಕೋನ ಆಕಾರವಾಗಿ ಇದ್ದು ಒಳಗಡೆ ಕದವನ್ನು ಮುಚ್ಚಿದ ಮೇಲೆ ಭದ್ರವಾದ ಅಗಳಿ ಬೂದುಗಳು ಇದ್ದು ಭದ್ರವಾದ ಕಲ್ಲಿನ ಬೆಣೆಯನ್ನು ಕಟ್ಟಲಾಗಿದೆ. ಮೂರನೆಯ ಹಂತದ ಕೋಟೆಯಂತೂ ಭಾರಿ ದೊಡ್ಡ ಪ್ರಮಾಣದ ಹುಡೇವು. ಇದರ ಮಧ್ಯದಲ್ಲಿ ಎತ್ತರವಾದ ಬುರುಜ ಇದೆ. ಇದರ ಒಳ ಭಾಗಕ್ಕೆ ಮೇಲೆ ಹತ್ತಲೂ ಇಳಿಯಲು ಪಾವಟಿಗೆಗಳುಂಟು. ೧೦ ಕಿ. ಮೀ. ವರೆಗೆ ಸುತ್ತಲ ಎಲ್ಲ ದಾರಿಗಳು ಕಾಣಿಸುವ ಹಾಗೆ ವ್ಯವಸ್ಥೆ ಇದೆ. ಹಾಗೂ ನೀರಿಗಾಗಿ ಹೊಂಡಗಳು, ಆನೆ-ಕುದುರೆಗಳಿಗೆ ಪ್ರತ್ಯೇಕ ನೀರಿನ ಕೆರೆಗಳು ಇದ್ದು ಮದ್ದಿನ, ಶಸ್ತ್ರದ ಕೋಣೆಗಳು ಈಗ ಬಿದ್ದು ಅವಶೇಷಗಳು ಮಾತ್ರ ಉಳಿದಿವೆ. ಸೈನಿಕರ ಬಿಡಾರಗಳು, ಅಂತಃಪುರ, ಧಾನ್ಯ ತುಂಬುವ ಗೋದಾಮುಗಳೂ ಇನ್ನೂ ಎಷ್ಟೋ ಕಟ್ಟಡಗಳ ಅಡಿಪಾಯಗಳು ಇದ್ದು ಗುಡಿಗಳೂ ಇರುತ್ತವೆ. ಮಾರುತಿ ದೇವಾಲಯವಿದ್ದು ಈಗ ಹಾಳು ಸ್ಥಿತಿಯಲ್ಲಿ ಇದೆ. ಬೆಳಗಾವಿ ಜಿಲ್ಲೆಯ ಅನೇಕ ಕೋಟೆಗಳಲಿ ಇವರ ರಚನೆ ಮಾತ್ರ ವಿಶಿಷ್ಟವಾಗಿದೆ.

ಈ ಕೋಟೆಯ ಹತ್ತಿರವೇ ಸುಕ್ಷೇತ್ರವಾದ ರೇಣುಕಾ ಎಲ್ಲಮ್ಮನ ದೇವಾಲಯವಿದ್ದು ಕರ್ನಾಟಕ ಮಹಾರಾಷ್ಟ್ರದಿಂದ ಭಕ್ತರು ಭಕ್ತಿಯಿಂದ ಬಂದು ಜಾತ್ರೆಯಲ್ಲಿ ಪಾಲುಗೊಳ್ಳುವರು. ಹತ್ತಿರದ ಮಲಪ್ರಭಾ ಆಣೆಕಟ್ಟು ಬಹಳ ಪ್ರಸಿದ್ಧಿ ಪಡೆದಿದೆ. ಫಲವತ್ತಾದ ಭೂಮಿ ಇದ್ದು ನೀರಾವರಿಗೆ ಬಹಳ ಅನುಕೂಲವಾಗಿದೆ.

ಸವದತ್ತಿ ಪಟ್ಟಣ ಈ ಕೋಟೆಗೆ ಸಮೀಪ ಇದೆ. ಈ ಊರಿನಲ್ಲಿ ಕೂಡಾ ಹಳೆಯದಾದ ಕೋಟೆಯಲ್ಲಿ ಕಾಡ ಸಿದ್ದೇಶ್ವರ ದೇವಸ್ಥಾನವಿದ್ದು ಇದು ಒಳ್ಳೆಯ ಭದ್ರವಾದ ಕೋಟೆ. ಸಮೀಪದಲ್ಲಿ ಹೂಲಿಯೆಂಬ ಗ್ರಾಮದಲ್ಲಿ ಶಿವಾಜಿ ಮಹಾರಾಜರು ಕ್ರಿ. ಶ. ೧೬೭೪ರಲ್ಲಿ ಕಟ್ಟಿಸಿದ ಕೋಟೆ ಇದೆ. ಸುತ್ತಲೂ ಇರತಕ್ಕಂತಹ ರಾಮದುರ್ಗ, ನರಗುಂದಗಳಲ್ಲೂ ಶಿವಾಜಿ ಕಟ್ಟಿದ ಕೋಟೆಗಳು ಇದ್ದು ಪರಸಗಡವೂ ಶಿವಾಜಿ ಕಾಲದಲ್ಲಿ ಮುಖ್ಯ ಕೋಟೆಯಾಗಿತ್ತೆಂದು ಹೇಳುತ್ತಾರೆ.

[ಈ ಲೇಖನ ಕಾರ್ಯದಲ್ಲಿ ನನಗೆ ಸಹಾಯ ಮಾಡಿದ ಶಂಕ್ರಪ್ಪ ಹಾದ್ಮನವರ ಇವರಿಗೆ ನಾನು ಋಣಿಯಾಗಿದ್ದೇನೆ.]